ಶೇಷವನ್ನು ತಾನು, ತನ್ನ ಪತಿಯು ಸ್ವೀಕರಿಸಬೇಕು. ಇಂತು ಒಂದುವರ್ಷದ ಪುಂಸವನ ವ್ರತವನ್ನು ಮಾಡಿ ಕಾರ್ತಿಕಮಾಸದ ಕೊನೆಯ ದಿವಸದಲ್ಲಿ ಮುಗಿಸಬೇಕು. ಆ ದಿನ ಪ್ರಾತಃಕಾಲದಲ್ಲಿ ಹಾಲಿನಿಂದ ಅನ್ನವನ್ನು ಮಾಡಿ, ತುಪ್ಪವನ್ನೂ ಕಲಿಸಿ ಆ ಚರುವಿನಿಂದ ಹನ್ನೆರಡಾಹುತಿಗಳನ್ನರ್ಪಿಸಬೇಕು. ಕೇಶವಾದಿ ದ್ವಾದಶಮೂರ್ತಿಗಳನ್ನು ನೆನೆದು ಹನ್ನೆರಡು ಬ್ರಾಹ್ಮಣದಂಪತಿಗಳಿಗುಣಿಸಿ ತಿಲ ಗೋ ಭೂ ಹಿರಣ್ಯಾದಿ ದಾನಗಳನ್ನು ಕೊಟ್ಟು ಅವರ ಆಶೀರ್ವಾದವನ್ನು ಸ್ವೀಕರಿಸಬೇಕು. ಅವರಿಗೆ ನಮಸ್ಕರಿಸಿ, ಅವರ ಅಪ್ಪಣೆಯನ್ನು ಪಡೆದು ತಾನು ಭುಂಜಿಸಬೇಕು. ಆಚಾರ್ಯನನ್ನು ಪೂಜಿಸಿ ಹುತಶೇಷ ಚರುವನ್ನು ಗಂಡನು ತನ್ನ ಸತಿಗೆ ಕೊಡಲು ಅವಳು ಸುಪ್ರಜಳು ಸೌಭಾಗ್ಯಳು ಆಗಿ ಸುಖಿಸುವಳು. ಈ ವ್ರತದಿಂದ ಸಿದ್ಧಿಸದ ಅಭೀಷ್ಟಗಳೇ ಇಲ್ಲ. ಇದನ್ನು ಮಾಡಿದ ತರುಣಿಯು ಚಿರಂಜೀವರಾದ ಪತಿ-ಪುತ್ರರನ್ನು ಪೊಂದುವಳು. ಸಂಪತ್ಸೌಭಾಗ್ಯಗಳನ್ನು ಕೀರ್ತಿಯನ್ನು ಪೊಂದಿ ಸುಖಿಸುವಳು. ಕನ್ಯೆಯು ಈ ವ್ರತವನ್ನು ಮಾಡಿದರೆ, ಸುಲಕ್ಷಣಪತಿಯನ್ನು ಪಡೆಯುವಳು. ಮೃತ ಪ್ರಜಳಾದ ವನಿತೆಯು ಮಾಡಲು ಜೀವತ್ಪ್ರಜಳಾಗುವಳು. ದರಿದ್ರಳು ಧನೇಶ್ವರಿಯಾಗು ವಳು. ಕುರೂಪಿಯು ಸುರೂಪಳೆನಿಸುವಳು. ರೋಗಾರ್ತರು ಆರೋಗ್ಯವನ್ನು ಪಡೆಯು ವರು. ಶಕ್ತಿಹೀನರು ಬಲವಂತರಾಗುವರು.

ಮಂಗಲಕಾರ್ಯಗಳಲ್ಲಿ ಈ ಮರುಜ್ಜನ್ಮಕಥೆಯನ್ನು ಪಠಿಸಿದರೆ, ಕಾರ್ಯಸಿದ್ಧಿಯು ಪಿತೃದೇವಋಷಿಪ್ರೀತಿಯೂ ಆಗುವುದು. ಶ್ರೀಹರಿಯು ಶ್ರೀದೇವಿಯು ಭಕ್ತನರ್ಪಿಸಿದ ಹೋಮದ್ರವ್ಯದಿಂದಲು ಅವನ ಭಕ್ತಿಯಿಂದಲು ಪ್ರೀತರಾಗಿ ಸಮಸ್ತಕಾಮಿತಾರ್ಥಗಳನ್ನಿತ್ತು ಸಲಹುವರು. ರಾಜನ್! ಈ ಪುಣ್ಯಕರವಾದ ಮರುಜ್ಜನ್ಮಕಥೆಯನ್ನು ನಿನಗೆ ನಾನು ನಿರೂಪಿಸಿದೆನು.

ಅನೇಕಜನ್ಮಾರ್ಜಿತಪುಣ್ಯಸಂಚಯಾತ್ ಮಹಜ್ಜನಾಂಘ್ರ್ಯಂಬುಜಗಂಧಸೇವನಾತ್।
ಷಷ್ಠಂ ವರಿಷ್ಠಂ ವಿಲಿಖನ್ ಕೃತಾರ್ಥೋಽಭವಂ ಗುರೋರದ್ಯ ಹರೇಃ ಕೃಪಾಬಲಾತ್॥

ಷಷ್ಠಸ್ಕಂಧವು ಸಂಪೂರ್ಣವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥